*I dream'd I lay where flowers were springing*
*Gaily in the sunny beam.*

—Robert Burns

# ಮುನ್ನುಡಿ

ಇದು 'ಇರುವಂತಿಗೆ'; ನನ್ನ ಐದನೆಯ ಕವನ ಸಂಗ್ರಹ. ಗಾತ್ರ ಚಿಕ್ಕದಾಗಿ ಹೆಸರು ಒಪ್ಪೀತು. ಇದರ ಗುಣ ಹೇಗೊ! ಅಲ್ಲದೆ, ಈ ಹೂವಿನ ದಳಗಳೆಲ್ಲ ಒಂದೇ ಬಣ್ಣ ಹೊರಲಿಲ್ಲ ಎನ್ನುವ ಟೀಕೆಗೂ ಸ್ಥಳವಿದ್ದೀತು. ಆಗಲೂ ಈ ತೆಳುಗೆಂಪಿನ ಇಕ್ಕಟ್ಟಾದ ಹೆಸರು ಬೇರೆ ಯೋಚನೆಗೆ ದಾರಿಕೊಡದು. ನನ್ನನ್ನು ಎಂದೂ ಪ್ರೀತಿಯಿಂದಲೆ ಕಾಣು ತ್ತಿರುವ ಕನ್ನಡ ಜನತೆಗೆ ಇದನ್ನು ನನ್ನ ಇನ್ನೂ ಒಂದು ಉಡುಗೊರೆ ಯಾಗಿ ಸಲ್ಲಿಸಿದ್ದೇನೆ. ಬಿಡಿಸಿ ತಂದ ಹೂವು ಹತ್ತೂ ಜನದ ಸಂತೋಷದ ಮುಡಿಯಲ್ಲಿ ಮಿನುಗಲಿ ಎನ್ನುವ ಒಂದು ಆಸೆ. ಆ ಸಂತೋಷವೆ ಒಂದು ಮಹದೈಶ್ವರ್ಯ; ಅದನ್ನು ಸೇರಿನ ಅಳತೆಯಲ್ಲಿ, ತಕ್ಕಡಿಯ ತೂಕದಲ್ಲಿ ಹಿಡಿಯುವುದು ಸಾಧ್ಯವಿಲ್ಲ.

ನನ್ನೊಬ್ಬನ ಸಂತೋಷಕ್ಕಾಗಿ ನಾನು ಕವಿತೆ ಕಟ್ಟುತ್ತಿಲ್ಲ; ಅಷ್ಟೆ ಆಗಿದ್ದರೆ, ಬರೆದ ಹೊರೆಯನ್ನು ಬಚ್ಚಿಡಲು ನನ್ನ ಮನೆಯಲ್ಲೆ ಸಾಕಷ್ಟು ಸ್ಥಳವಿತ್ತು. ಇದನ್ನು ಅಚ್ಚಿನ ಮನೆಗೆ ದಬ್ಬುವ ಪ್ರಮೇಯವಿರಲಿಲ್ಲ. ಆದರೆ ಜನತೆಯಲ್ಲಿ ಸೇರಿಕೊಂಡು ಅವರಿಂದ ಪಿರಿದ ಸಂಪತ್ತನ್ನು ಹಾಗೆ ಹಗೇವಿನಲ್ಲಿ ಮುಚ್ಚಿಡುವುದು ಕೃತಜ್ಞತೆಯ ಕುರುಹಲ್ಲ. ಕವಿತೆ ಕೂಡ ಕಟ್ಟುವ ತನಕ ಕವಿಯ ಅಧೀನ; ಕಟ್ಟಿದ ಮೇಲೆ 'ಗಂಡನ ಮನೆಗೆ ಕಳಿಸಿ ಕೊಟ್ಟ ಮಗಳಂತೆ' ಪರಾಧೀನ. ಬಿಟ್ಟು ಬಾಳುವುದೆ ಇಲ್ಲಿ ಸ್ನೇಹ.

ಈ ಇಪ್ಪತ್ತು ವರುಷಗಳಲ್ಲಿ ಕನ್ನಡ ಕಾವ್ಯಜಗತ್ತಿನಲ್ಲಿ ಎಷ್ಟೊ ಮರುಭೂಮಿಗಳು ಹಸುರಾಗಿವೆ, ಹೊನ್ನಾಗಿವೆ; ಹೊಸ ಧ್ವನಿಗಳು ಕೇಳಿ ಬರುತ್ತಿವೆ. ಹಿರಿಯರಿದ್ದರು, ಹಿರಿಯರಿದ್ದಾರೆ. ಹಿಮವತ್ಪರ್ವತವಿದೆ ಎಂದು ಚಾಮುಂಡಿಬೆಟ್ಟ ಹಾರಿಹೋಗಿಲ್ಲ; ಕಿರಿಯರೂ ಆಶ್ಚರ್ಯಕರ ವಾದ ಕೃತಿಗಳನ್ನು ರಚಿಸುತ್ತಿದ್ದಾರೆ. ಎದುರುಗಾಳಿಗೆ ಹೆದರಿ ಯಾರೂ ಮನೆಯೊಳಗೆ ಮೂಲೆ ಹಿಡಿದಿಲ್ಲ. ಅವರು ಧೈರ್ಯವಾಗಿ ನಡೆದ ದಾರಿ ಯಲ್ಲಿ ಇವರು ನಿರ್ಭಯವಾಗಿ ಸಾಗುತ್ತಿದ್ದಾರೆ. ಅವರು ತೆರೆದ ಹೊಸ ಹೊಸ ಲೋಕಗಳಲ್ಲಿ ಇವರ ಕಣ್ಣು ಯಾತ್ರೆಮಾಡುತ್ತಿದೆ. ಅವರ ತೆಂಗಿನ ತೋಟದಲ್ಲಿ ಇವರು ಮಲ್ಲಿಗೆಯನ್ನು ಹಬ್ಬಿಸುತ್ತಿದ್ದಾರೆ. ವಿವೇಚನೆಗೆ,

ವಿಮರ್ಶೆಗೆ ಕೂಡ ಅವಕಾಶವಾದದ್ದು ಆ ಹಿರಿಯ ಕವಿಗಳಿಂದಲೆ, ಈ ಕಿರಿಯ ಉತ್ಸಾಹಿ ಕವಿಗಳಿಂದಲೆ. ಮೊದಲು ಹೊಸ ಮಾರ್ಗವಾಗಿ ಹೊರಟದ್ದು ಇಂದು ಒಂದು ಹೊಸ ಸಂಪ್ರದಾಯವಾಗಿದೆ. ಈ ಸಂಪ್ರದಾಯವನ್ನೂ ಯೋಗ್ಯರೀತಿಯಲ್ಲಿ ಹಿಂದೆ ಹಾಕಿ ಬೇರೆ ಬೇರೆ ಸಂಪ್ರದಾಯಗಳು ಬಂದಾವು; ಬರುತ್ತಿವೆ. ಆಗಲೂ ನಿಜವಾದ ಕವಿತೆ ಯಾವ ಕಾಲದಲ್ಲಾಗಲಿ ಉಳಿಯುತ್ತದೆ; ಅದಕ್ಕೆ ಏನು ಭಯವೂ ಇಲ್ಲ. ನೂತನ ಕವಿತೆಗೆ ಅದು ಸಹಜವಾದ ಕೈಮರವಾಗುತ್ತದೆ; ಕಾವ್ಯಸತ್ವದ 'ಮಾನದಂಡ'ವಾಗುತ್ತಿದೆ. ಚಕ್ರ ಹೀಗೆ ಉರುಳುತ್ತಿದೆ.

ನನ್ನ ಬಗೆಗೆ ಕನ್ನಡಜನತೆ ಪ್ರೀತಿಯಿಂದ ಕಾಣುತ್ತಿದೆ ಎಂದು ಹೇಳಿದೆ. ಹೀಗೆಂದ ಮಾತ್ರಕ್ಕೆ ನನ್ನ ಕೃತಿಗಳಲ್ಲಿ ಎಲ್ಲವನ್ನೂ ಎಲ್ಲರೂ ಮೆಚ್ಚುತ್ತಾರೆಂಬ ಅಭಯವಿಲ್ಲ ನನಗೆ; ಅಹಂಕಾರಕ್ಕೂ ಕಾರಣವಿಲ್ಲ. ಜನತೆ ಕವಿತೆಗೆ ಒಲಿಯುವುದು ಹತ್ತೂಜನ ಸಹೃದಯರ ರಾಯಭಾರದಿಂದಲೆ ಎಂಬುದನ್ನು ನಾನು ಚೆನ್ನಾಗಿ ಬಲ್ಲೆ. ಆ ಹತ್ತೂಜನದ ಆಯ್ಕೆಯೂ ಹದಿನಾರು ಬಗೆಯಾಗುವುದು ಕಂಡ ವಿಷಯ. ಹೀಗೆ ಆಯ್ಕೆಗೆ ಎಡೆಗೊಡುವಂಥ ಕೃತಿಗಳೂ ಒಳ್ಳೆಯವೆ. ಅಂಥವೆ ಬಹಳ. ಅವರವರಿಗೆ ಇಷ್ಟವಾದದ್ದನ್ನು ಅವರವರು ಆರಿಸಿಕೊಳ್ಳುತ್ತಾರೆ. ಅದೂ ಸರಿಯೆ!

ನಾನು ಆಗಾಗ ಬರೆದ ಕವಿತೆಗಳನ್ನು–ಒಂದೊಂದು ಸಲ ಅವು ಪೂರ್ತಿಯಾಗುವ ಮುನ್ನವೆ—ಅಣ್ಣ 'ವಿ.ಸೀ' ಅವರಿಗೆ ತೋರಿಸುವುದು ರೂಢಿಯಾಗಿದೆ. ನನ್ನಿಂದ ಅವರಿಗೆ ಏನು ಕಾಟವಾಗಿದ್ದರೂ, ನನಗೆ ಅವರಿಂದ ಅಮಿತ ಲಾಭವಾಗಿದೆ. ನನ್ನಂಥ ಕಿರಿಯರ ವಿಷಯದಲ್ಲಿ ಅವರಿಗಿರುವ ಆದರ ಅಭಿಮಾನಗಳನ್ನು ನಾನು ತಕ್ಕಮಟ್ಟಿಗೆ ಸೂರೆಗೊಂಡಿದ್ದೇನೆ. ನಿಜವಾಗಿ ಅವರು ನನ್ನ ಕವಿತೆಯ ಬಹುಭಾಗಕ್ಕೆ ಅಧ್ಯಕ್ಷರು. ಅವರು ಧೈರ್ಯಕೊಡುತ್ತಲೆ ಇರುವುದರಿಂದ ಈ ಕೃತಿಯೂ, ನನ್ನ ಉಳಿದ ಕೆಲವು ಕೃತಿಗಳಂತೆ ಮೈಗೂಡಿತು. ನಾನವರಿಗೆ ಚಿರಋಣಿ ಎಂದಿಷ್ಟುಮಾತು ಹೇಳಿದರೆ ನನ್ನ ಮನಸ್ಸಿಗೆ ಸಾಲದು; ಹೆಚ್ಚು ಮಾತು ಬಳಸುವುದಕ್ಕೆ ಬಾಯಿಬರದು. ಈ ಕೃತಜ್ಞತೆಯ ಮೌನಮೂರ್ತಿಯಾಗಿ ಬಂದಿದೆ 'ಇರುವಂತಿಗೆ'.

**ಕೆ. ಎಸ್. ನ.**

# ವಿವರ

# ಅಕ್ಕಿಯಾರಿಸುವಾಗ

ಅಕ್ಕಿಯಾರಿಸುವಾಗ ಚಿಕ್ಕ ನುಚ್ಚಿನ ನಡುವೆ
ಬಂಗಾರವಿಲ್ಲದ ಬೆರಳು ;
ತಗ್ಗಿರುವ ಕೊರಳಿನ ಸುತ್ತ ಕರಿಮಣಿಯೊಂದೆ
ಸಿಂಗಾರ ಕಾಣದ ಹೆರಳು ;

ಹೆರಳಿನ ಭಾರಕ್ಕೆ ತುಂಬಿರುವ ಕೆನ್ನೆಯಲಿ
ಹದಿನಾರು ವರುಷದ ನೆರಳು ;
ದೀಪದಂತರಳಿದ ಸಿರಿಗಣ್ಣ ಸನ್ನೆಯಲಿ
ಹುಚ್ಚುಹೊಳೆ, ಮುಂಗಾರಿನುರುಳು ;

ಕಲ್ಲ ಹರಳನು ಹುಡುಕಿ ಎಲ್ಲಿಗೋ ಎಸೆವಾಗ
ಜಲ್ಲೆನುವ ಬಳೆಯ ಸದ್ದು ;—
ಅತ್ತ ಯಾರೋ ಹೋದ ಇತ್ತ ಯಾರೋ ಬಂದ
ಕಡೆಗೆಲ್ಲ ಕಣ್ಣು ಬಿದ್ದು,

ಮನೆಗೆಲಸ ಬೆಟ್ಟದಷ್ಟಿರಲು ಸುಮ್ಮನೆ ಇವಳು
ಚಿತ್ರದಲಿ ತಂದಂತೆ ಇಹಳು.
ಬೇಸರಿಯ ಕಿರುಮುತ್ತು ನುಚ್ಚಿನಲಿ ಮುಚ್ಚಿರಲು
ಹುಡುಕುತಿವೆ ಆ ಹತ್ತು ಬೆರಳು !

# ಮುಳ್ಳು

ತೋಟವಿದೆ ತನಗೆ, ಸುಖಿ ತಾನು, ಎಂದನು ಮಾಲಿ ;
ಎಳನೀರು, ರಸಬಾಳೆ, ಕಸಿಮಾವು, ಚೆಂಜೇನು !
ಬೇಕು ಬಾಳಿಗೆ ಒಂದು ತೋಟ, ಏನೇ ಇರಲಿ !—
ಚಿಂತೆಯೂ ಒಂದಿದೆ : ಇವನು ಕಾಯುವುದೆಂತು ?

ಬೇಲಿಯಿದೆ ಎಂದು ನಂಬಿದೆ ತೋಟ ; ಆ ಬೇಲಿ
ಮುಳ್ಳಿರುವ ತನಕ ಆತಂಕ ತನಗಿಲ್ಲೆಂದು
ನೆರೆ ನಂಬಿ ತಾನು ತುಂಬಿದ ಹೂವ ತೊಟ್ಟಿಹುದು.
ತೋಟಕ್ಕೆ ಮುಳ್ಳು ಕಾವಲು ಎಲ್ಲ ಕಾಲದಲಿ.
ಒಡೆಯನಿಗೆ ಹೇಳಿ ಬಾಗಿಲ ತೆರೆದು ಬರಬಹುದು ;
ಕದ್ದು ಬಂದವರಿಗಿಲ್ಲಿದೆ ಮದ್ದು ; ಮುಳ್ಳಿಹುದು.

ಕಾಯುತಿದೆ ಮುಳ್ಳು ತೋಟವನು. ಈ ಭೂಮಿಯನು
ಕಾಯುತಿದೆ ಒಂದು ಕಾಣದ ಮುಳ್ಳು. ಮುಳ್ಳಿಂದು
ಲಘುವಾಗಿ ನುಡಿವರಾಶಕ್ತಿಗೆಲ್ಲಿದೆ ಹಾನಿ ?
ಲೋಕವನು ರಕ್ಷಿಸುವ ಮುಳ್ಳಲ್ಲ ನಿರಭಿಮಾನಿ !

# ಕಾರಣ ಯಾರಿಗೆ ಗೊತ್ತು ?

ಮದುಮಗಳ ಹೆಣ್ಣು ; ನಾಳೆಯೆ ಮದುವೆ ; ಇವಳೇಕೆ
ಮೂಲೆಯ ಹಿಡಿದು ಮಲಗಿಹಳು ?
ಬಿಳಿವಲ್ಲಿ ಬೆನ್ನ ಹತ್ತಿರವಿಹುದು ; ಹೂದಂಡೆ
ಹೆರಳಲ್ಲಿ ; ಮಾತಿಲ್ಲ ; ಉಸಿರು.

ಥಳ ಥಳಿಸುವ ಕಣ್ಣು ಮುಚ್ಚಿ, ಕೆದರಿದ ಕುರುಳ
ಹತ್ತಾರು ದಿಕ್ಕಿಗೆ ಹರಿಸಿ,
ಹೊದಿಕೆಯ ಹೊರಗೆ ಮುಂಗೈ ಬೀಸಿ, ನಡುಬೆರಳ
ಉಂಗುರದ ನಡುಹರಳ ಜ್ವಲಿಸಿ,

ಬೆನ್ನ ಸೆರಗಿನ ಮೇಲೆ ಅರಿಯದೆ ತಂಗಿದ
ಜರತಾರಿ ಹೂವನು ಮರೆತು,
ತಲೆಯಿಟ್ಟ ತುಂಬುದಿಂಬಿನ ಮೇಲೆ ಹಣೆಗಿಟ್ಟ
ಕುಂಕುಮದ ಒತ್ತನು ಕುರಿತು,

ಏನೇನೊ ಮಾತು— ದೇವರು ಬಲ್ಲ !— ಮಾತೆಲ್ಲ
ಹೊಂದದೆ ಒಡೆದ ಕಿರುಮುತ್ತು ;
ಮನಸಿನ ಮೇಲುಮಾಳಿಗೆಯಲ್ಲಿ ಬೆಳಕಿಲ್ಲ.
ಕಾರಣ ಯಾರಿಗೆ ಗೊತ್ತು?

# ನಿನ್ನೊಲುಮೆ

ನಿನ್ನೊಲುಮೆಯಿಂದಲೇ ಬಾಳು ಬೆಳಕಾಗಿರಲು
ಚಂದ್ರಮುಖಿ ನೀನೆನಲು ತಪ್ಪೇನೆ ?
ನಿನ್ನ ಸೌಜನ್ಯವೇ ದಾರಿನೆರಳಾಗಿರಲು
ನಿತ್ಯಸುಖಿ ನೀನೆನಲು ಒಪ್ಪೇನೆ ?

ನಿನ್ನ ನಗೆಮಲ್ಲಿಗೆಯು ಪರಿಮಳದ ಪಾತ್ರೆಯಲಿ
ಚೆಲ್ಲಿಸೂಸುವ ಅಮೃತ ನೀನೇನೆ !
ನನ್ನ ಕನಸುಗಳೆಲ್ಲ ಕೈಗೊಳುವ ಯಾತ್ರೆಯಲಿ
ಸಿದ್ಧಿಸುವ ಧನ್ಯತೆಯು ನೀನೇನೆ !

ನಿನ್ನ ಕಿರುನಗೆಯಿಂದ, ನಗೆಯಿಂದ, ನುಡಿಯಿಂದ
ಎತ್ತರದ ಮನೆ ನನ್ನ ಬದುಕೇನೆ !
ಚಂದ್ರನಲಿ ಚಿತ್ರಿಸಿದ ಚೆಲುವಿನೊಳಗುಡಿಯಿಂದ
ಗಂಗೆ ಬಂದಳು ಇದ್ದ ಕಡೆಗೇನೆ !

# ಚಿಂತೆಗೆ ಕಣ್ಣತೆತ್ತವಳೆ!

ಚಿಂತೆಗೆ ಕಣ್ಣ ತೆತ್ತವಳೆ, ಚಿಲುಕದಮೇಲೆ
ಮುಂಗೈಯನೂರಿ ನಿಂತವಳೆ,
ಬಿಂದಿಗೆ ಹೊರದೆ ಸೋತವಳೆ, ಸಣ್ಣಗೆ ಒಳಗೆ
ಚಿಂತೆ, ಏತರ ಚಿಂತೆ, ನಿನಗೆ?

ಚಿಂತೆಗೆ ಕಣ್ಣ ತೆತ್ತವಳೆ, ತುರುಬಿನ ತುದಿಗೆ
ಒಂದೆ ಹೂವನು ಮುಡಿದವಳೆ,
ಒಂದೊಂದೆ ಬಳೆಯ ತೊಟ್ಟವಳೆ, ಈ ಮನೆಯೊಳಗೆ
ಚಿಂತೆ, ಏತರ ಚಿಂತೆ, ನಿನಗೆ?

ಚಿಂತೆಗೆ ಕಣ್ಣ ತೆತ್ತವಳೆ, ಹತ್ತಿದ ದೀಪ
ಮಂಕಾಗಿ ತೋರಿ ನಿಂತವಳೆ,
ಸಂತೆಗೆ ಹೋಗಿ ಬರಿಗೈಲೆ ಬಂದೆಯ, ಪಾಪ!—
ಚಿಂತೆ, ಏತರ ಚಿಂತೆ, ನಿನಗೆ?

ನಿನಗಾವ ಚಿಂತೆ ಚಿಕ್ಕವಳೆ, ಚಿನ್ನದ ಬಳೆಗೆ
ಒಪ್ಪುವ ತುಂಬುಗೈಯವಳೆ!
ಗಾಳಿಯ ಸುಳಿಗೆ ಹೂವಾದ ಮಲ್ಲಿಗೆಯರಳೆ,
ಬಂಡಿಯ ದನಿಗೆ ಬೆಚ್ಚುವಳೆ!—

ನಿನಗಾವ ಚಿಂತೆ, ಚಿಕ್ಕವಳೆ, ತುಂಬಿದ ಮನೆಗೆ
ಘನವಾಗಿ ಬಂದ ಗುಣದವಳೆ,
ನುಡಿದೊಂದು ಮಾತು ಸಾಕೆನುವ ಇನಿದನಿಯವಳೆ,
ತಲೆತಗ್ಗಿ ನಾಚಿ ನಡೆಯುವಳೆ?

ಮಳೆ ಬಿದ್ದು, ಕೆರೆ ತುಂಬಿ ನೀರು! ಮಿಂಚುವ ನೀರು,
ಬರಿ ನೀರೆ? ಥೇಟು ಪನ್ನೀರು!
ಅತ್ತಿತ್ತ ನೆಲ ಹೂವ ತೇರು; ಅಲ್ಲಿಗೆ ಬಾನು
ಇದ್ದೀತು ಒಂದೆರಡು ಮಾರು!

ಮನೆಗಿಂತ ಬಾನು ಎತ್ತರವೆ ? ಆದರೆ ಏನು ?
ಬಾನಿಗೆ ತಾರೆ ಹತ್ತಿರವೆ ?
ಏನಂಥ ಬೆಟ್ಟ ಹೊತ್ತಿರುವೆ ? ಸುಮ್ಮನೆ ನೀನು
ಸೊಂಪಾಗಿ ನಿಲುವುದುತ್ತರವೆ ?

ತೋಟದ ಮೇಲಿಲ್ಲ ತೆಂಗು ; ತೆಂಗಿನ ಮೇಲೆ
ತೆರೆದ ಹೊಂಬಾಳೆಯ ರಂಗು !
ಗೊನೆ ಬಿಟ್ಟ ರಸಬಾಳೆ ಕಂದು ; ಹಣ್ಣಿನ ಮೇಲೆ
ಹುದುಗಿತ್ತು ಗಿಣಿಯೊಂದು ಬಂದು.

ವೀಣೆಗೆ ತಂತಿಯ ಚಿಂತೆ ; ತಂತಿಗೆ ತನ್ನ
ಹುಡುಕುವ ಬೆರಳಿನ ಚಿಂತೆ ;
ಬೆರಳಿಗೆ ಉಂಗುರದ ಚಿಂತೆ ; ಚಿಂತೆಗೆ ತನ್ನ
ಮಡಿಲ ತುಂಬುವುದೊಂದೆ ಚಿಂತೆ.

ಇಲ್ಲದ ಸಲ್ಲದ ಚಿಂತೆ ; ಅದು ಬಂದಂತೆ
ಹೋದೀತು ಇರಲೊಂದು ಗಳಿಗೆ !
ಸಂಶಯ ನನಗಿಲ್ಲ, ಚೆಲುವೆ ; ಚೆಲುವಿಗೆ ಚಿಂತೆ ;
ಚಿಂತೆಯಿಲ್ಲದ ಚೆಲುವು ಚೆಲುವೆ ?

# ನೀರಿಗೆ ಬಿದ್ದ ಹೆಣ್ಣು

ನೀರಿಗೆ ಬಿದ್ದ ಹೆಣ್ಣು ತಾವರೆಯ ತೆನೆಯಾಗಿ
ಹೂವಾಗಲಿಲ್ಲ ಕೆಂಪಾಗಿ.
ಸಾವಿನಲಿ ಶಾಂತಿ ಉರುಳಿತ್ತು ತಲೆಕೆಳಗಾಗಿ
ಆ ಎಲ್ಲ ನೋವು ತಂಪಾಗಿ.

ನೀರಿಗೆ ಬಿದ್ದ ಹೆಣ್ಣು ಒಂದೇ ಮುಳುಗು ಮುಳುಗಿ
ಕಂಡಿತ್ತು ಸಾವಿನ ಯುಗಾದಿ.
ಸುತ್ತೆಲ್ಲ ಕಿತ್ತು ಬಿದ್ದಿತ್ತು ಆಸೆಯ ಜೋಲಿ
ತೆರೆದಿತ್ತು ಹುಡಿಮಣ್ಣ ಹಾದಿ.

ನೀರಿಗೆ ಬಿದ್ದ ಹೆಣ್ಣು ಯಾರಿಗೂ ಹೇಳದೆಯೆ
ಆಗಿತ್ತು ಕೆರೆಗೆ ಆಹುತಿ.
ಹಾಲ ಕಾಣದ ಬದುಕು ಕುಡಿದಿತ್ತು ಕೆರೆಯನೆ ;
ಅಲ್ಲಿತ್ತು ಅದರ ಸದ್ಗತಿ.

ಗಂಡ ಬಂದನು ಕಡೆಗೆ ನಡೆಬಂದ ಕಂಬದೊಲು ;
ಹತ್ತು ಜನ ಅಲ್ಲಿ ಒದಗಿದರು.
ಬೆಂಕಿ ಹೆಣವನು ನುಂಗಿ ಬೆಂಬೂದಿಯಾಗಿರಲು,
ಉಳಿದವರು ಊರ ಸೇರಿದರು.

ನೀರು ಮುಗಿಸಿದ ಕಥೆಗೆ ಬೆಂಕಿ ಮಂಗಳ ಹಾಡಿ
ನಡೆದಿತ್ತು ದೈವ ಸಂಕಲ್ಪ.
ಇಂಥ ಬಾಳಿಗೆ ಸಾವೆ ನಂದನದ ಕೆರೆ-ಕೋಡಿ ;
ಮಸಣದಲಿ ಮಾತ್ರ ಸುಖತಲ್ಪ .

ಹೆಣ್ಣು ಸತ್ತಳು ಏಕೆ ? ನೆರೆಯ ನಿರ್ಭಾಗ್ಯರಿಗೆ
ಸಂಶಯದ ಮೇಲೆ ಸಂಶಯ.
ಕಾರಣದ ಬಂಗಾರ ಬೇಟೆ ಫಲಿಸದೆ ಕಡೆಗೆ
ಸತ್ತವಳ ಮೇಲೆ ಸಂಶಯ.

ಕಯ್ಯಾರ ಕೆರೆಗೆ ತಳ್ಳಿದನೆ ಮಡದಿಯನಿವನು ?
ನ್ಯಾಯದಲಿ ತೀರ್ಪು : ನಿರ್ದೋಷಿ.
ಗದ್ದಲದ ಗಡಸು ನಾಲಗೆಯ ಗಂಡಲ್ಲಿವನು ;
ಊರು ಕಂಡಂತೆ ಮಿತಭಾಷಿ.

ಸತ್ತವಳ ಮೇಲೆ ಸಂಶಯ.—ಊರಿಗಿವನಂಥ
ಮಾದರಿಯ ಗಂಡ ಆಭರಣ.
ಸತ್ತವಳು ಇಳಿದು ಸತ್ಯವನೊದರುವಂತಿಲ್ಲ ;
ಸಂಗತಿಗೆ ಮೌನದಾವರಣ.

ನೀರಿಗೆ ಬಿದ್ದ ಹೆಣ್ಣ ಗಂಡನ ಹಣೆಯ ಮೇಲೆ
ಬಿಡುಗಡೆಯ ನಿರ್ಭಯದ ತಿಲಕ.
ಎದೆಯಲಿ ಏನೊ ಎಂತೊ, ತೋರುವ ಮುಖದ ಮೇಲೆ
ಎಷ್ಟೊಂದು ನೋವು, ನಾಟಕ !

ಸತ್ತಳು ಏಕೆ ಹೆಣ್ಣು (ಊರಿಗೆ ಇಲ್ಲ ಕಣ್ಣು):
ಅಂತು ಕೇಳಿದನೊಬ್ಬ ಕುಂಟ.
ಸತ್ತರೆ ಏನು ನಷ್ಟ ? ಕಾದಿದೆ ಬೇರೆ ಹೆಣ್ಣು :
ಇಂತು ಹೇಳಿದನೊಬ್ಬ ನಂಟ.

ಕನಿಕರದಿಂದ ಬಂದ ಕುರಿಯೊಂದು ನುಡಿದಿತ್ತು :
ಮುಗಿದಿತ್ತು ಹೆಣ್ಣ ಹಣೆ-ಬರಹ.
ಮಾನವ ಜನ್ಮಧಾರಿ ನರಿಯೊಂದು ನಕ್ಕಿತ್ತು :
ನೀರಿಗೆ ಜಾರಿ ಬಿದ್ದ ವಿಷಯ.

## ೨೬—೧—೫೦

ತಲೆಯ ಮೇಲಿನ ಹೆಜ್ಜೆ ಎಂದೋ ತೆರಳಿತು
ಪಡುವಲಿನ ಬಿಳಿ ಕೆಂಪು ನೀಲಿ ನೀರನು ದಾಟಿ,
ಮರಕತ ದ್ವೀಪದರಮನೆಗೆ. ದಣಿಗೂ ದಣಿವು !
ಇತ್ತ ಈ ಬಿಡುಗಡೆಯೊ ಮೈಮುರಿದು ಪರಶಿವನ
ತ್ರಿಶೂಲದಂತಾಯ್ತು ನೋಡುವ ಕಣ್ಣಿಗೆ !

ತಲೆಯ ಮೇಲಿನ ಹೆಜ್ಜೆ.—ಈ ಮಾತು ಮುಗಿಯಿತು ;
'ಹೆಜ್ಜೆಯೇ ಅಲ್ಲ ಮಕುಟದ ಮುತ್ತು ಅದು,
ಇರಲಿ ರಾಜತ್ವ ನೆಪಮಾತ್ರ' ಎನುವಂತಿಲ್ಲ,—
ಮಕುಟ ರಹಿತ ಸಾಮ್ರಾಜ್ಞಿ ಭಾರತಲಕ್ಷ್ಮಿ,
ರಾಜತ್ವ ರಹಿತ ರಾಜ್ಯಾಂಗ ಮನೋಮಂದಿರೆ.

ನೆನೆ ನೆನೆ ಓ ಮನವೆ ನಿನ್ನ ಎದೆಗತ್ತಲೆಯ
ಬಲಿಗೊಟ್ಟ ತಂದೆ ಬಾಳಿನ ಚಂದ್ರಬಿಂಬವನು.
ಆ ನೋಟ ನಿನ್ನ ಕಣ್ಣಾಗಿ, ಅಮೃತವೆ ತುಂಬಿ,
ಗಾಂಧಿಜಿಯ ಮಂದಹಾಸವೆ ಗುರುವಾಗಲಿ !

ಬಾಂಬಿನ ಅಲಂಕಾರ ನಿನಗಿಲ್ಲ, ತಾಯೆ,
ಶಾಂತಿ ಪ್ರಿಯೆ, ಚಂದ್ರಕಾಂತಿ ಪ್ರಿಯೆ,
ಗಂಗಾ ಯಮುನಾ ನದನದೀ ಸ್ನಾತೆ,
ಉಪನಿಷದ್ವಿಪಿನ ಹೋಮಾಗ್ನಿ ಸಂಜಾತೆ !

ಚಳಿಗಾಲ ಬಂದಿರಲು, ಮುದುಕಿ ಮುಮ್ಮೂಲೆಯಲಿ
ಒಂದು ಕಿಡಿ ಕೆಂಡದೆದುರಿನಲಿ ಮೈ ಹಿಡಿಯಾಗಿ
ಬೆದರಿ ಕುಳಿತಂತೆ, ಚಿಂತೆಗೆ ಆತ್ಮವನು ತೆತ್ತು
ಸಂಗ್ರಾಮ ಭೀತಿಯಲಿ ಸೋತು ಸೊರಗಿ ಜಗತ್ತು
ದೂರ ಸಭೆಗಳಲಿ ಮುಗಿಯುವ ಮುನ್ನ ಎಚ್ಚರಿಸು.
ನಿನ್ನ ಗಂಭೀರವಾಣಿಯ ಪಾರಿವಾಳಗಳ

ಬೆಳ್ಗರಿಯು ಬೀಸಿ ಶಾಂತಿಯು ಶಿಶುವನುಪಚರಿಸು ;
ಅದು ಬೆಳೆದು ಲೋಕನಾಯಕನಾಗಿ ರಾರಾಜಿಸಲಿ !

ಜಗಜ್ಜನನಿಯಲ್ಲ ನೀನು ; ಜಗನ್ಮೋಹಿನಿಯೂ ಅಲ್ಲ ;
ಜಗದ್ಧಾತ್ರಿಯಾಗಿರು ನೀನು ; ಅಹಿಂಸಾವತ್ಸಲೆ,
ನಿನ್ನ ಶಾಸನವಿದು (ನಡೆ ನಗಾರಿಯ ಮೇಲೆ ;
ಈ ಧರ್ಮ ನಿನ್ನ ಬಾವುಟದ ಇನ್ನೂ ಮೇಲೆ) :

"ವಯಂ ಪುನಃ ಏವಂ ಆಚಕ್ಷಾಮಹೇ,
ಏವಂ ಭಾಷಾಮುಹೇ, ಏವಂ ಪ್ರರೂಪಯಾಮಃ,
ಏವಂ ಪ್ರಜ್ಞಾಪಯಾಮಃ,—
ಸರ್ವೇ ಪ್ರಾಣಾಃ, ಸರ್ವೇ ಭೂತಾಃ, ಸರ್ವೇ ಜೀವಾಃ,
ಸರ್ವೇ ಸತ್ವಾಃ,
ನ ಹಂತವ್ಯಾಃ
ನ ಆಜ್ಞಾಪಯಿತವ್ಯಾಃ
ನ ಪರಿಗೃಹೀತವ್ಯಾಃ
ನ ಪರಿತಾಪಯಿತವ್ಯಾಃ
ನ ಉಪದ್ರೋತವ್ಯಾಃ
ಆರ್ಯವಚನಮೇತತ್
ಓಂ ತತ್‌ಸತ್."

## ೧೫-೮-೫೦

ಈ ಧ್ವನಿಯೆ ಬೇರೆ ; ಈ ನೋಟ ಚಂದ್ರನ ತೋಟ ;
ಇದರ ಕಣಿ ಬೇರೆ ; ಇದು ತಾನೊಂದೆ ಸಾರುತಿದೆ
ಯುದ್ಧ ಕೂಡದೆಂದು. ಅತ್ತ ಅಸ್ತ್ರದ ನೋಟ
ಅರ್ಧ ಭೂಮಿಗೆ ಸದಾ ಸರಿಯೆಂದು ತೋರುತಿದೆ.
ಕೊಲೆಮನೆ ; ಕಡುಗತ್ತಿ, ಕುರಿಮರಿಯ ಕುಣಿದಾಟ—
ಬೇಕು ಮಾನವನ ದಾನವತೆಗೀ ರಾತ್ರಿಯೂಟ !

ಈ ಧ್ವನಿಯೆ ಬೇರೆ ! ಬಾಂಬಿಗೆ ಹೆದರಲಿಲ್ಲ ಇದು ;
ಕತ್ತಿಯಲಿ ಕೆತ್ತಿದ ಸ್ವತಂತ್ರತೆಯನರಿಯದಿದು ;
ನೆತ್ತರಲಿ ಬರೆದ ನಾಗರಿಕತೆಯ ಕುರಿಯದಿದು ;
ಶಸ್ತ್ರವನು ನಂಬಿ ಶಾಂತಿಯ ಸೋಗ ಹಾಡದಿದು.
ಈ ನಾಡು ಬೇರೆ, ಇದು ನಡೆವ ದಾರಿಯೆ ಬೇರೆ ;
ಇದರ ನಡೆ, ನೋಟ, ನಂಬಿಕೆ, ಎಲ್ಲ ಬೇರೆ ಬೇರೆ !

'ಇಂಡಿಯಾ' ಇಂಪಾದ ಹೆಸರು. ಏಷ್ಯದ ತಾಯಿ
ಬೆಟ್ಟದಲಿ ಹಡೆದು, ನದಿಯಲಿ ತೊಳೆದು, ನಾಕದಲಿ
ತೂಗಿ, ನೆತ್ತಿಗೆ ತಾರೆಗಳನೊತ್ತಿ, ಮುಗಿಲಲಿ ಸುತ್ತಿ,
ಚಳಿಗಾಳಿ ಉರಿಗಾಳಿ ಬೀಸಿ, ಭುಜವನು ತಟ್ಟಿ
ಜಗಜಟ್ಟಿಯಾಗಿಸಿದ ಹಿರಿಯ ಮಗಳೀ ನಾಡು !—
ಆ ತಪೋವನಗಳಲಿ ನರ್ತಿಸುವ ನವಿಲ ನೋಡು.

ದೇವದೂತರು ದಿಕ್ಕ ತೋರಿದರು ; ಶಾಂತಿಯಲಿ
ಧನ್ಯರ್ಷಿಗಳು ಕಡೆದ ಬ್ರಹ್ಮಜಿಜ್ಞಾಸೆಯಲಿ
ಧವಳಗಿರಿಯಂತೆ ಬೆಳಕಾದ ಸಿರಿಮೊಗವೆತ್ತಿ
ಏಷ್ಯದ ಹಿರಿಮಗಳು, ಭರತನ ಸಾಕು-ತಾಯಿ
ಸಾರುತಿಹಳೆಂದು ಎತ್ತಿದ ಕತ್ತಿಗಳ ತಡೆದು :
ಶಾಂತಿ ಮೂಡದು ರಕ್ತಪಾತದಲಿ. ಶಾಂತಿರಸ್ತು.

# ಶ್ರೀ ಕೃಷ್ಣನಂತೊಂದು ಮುಗಿಲು

ಶ್ರೀ ಕೃಷ್ಣನಂತೊಂದು ಮುಗಿಲು
ರಾಧೆಯಂತಿನ್ನೊಂದು ಮುಗಿಲು
ಹೊಳೆದಾರಿ ಕಾಯುವ ಮುಗಿಲು
ಜರತಾರಿ ಸೆರಗಿನ ಮುಗಿಲು

ಬೆಣ್ಣೆಯ ಗಿರಿಯಂತೆ ಮುಗಿಲು ಅಲ್ಲೆ
ಬಳಸುವ ಯಮುನೆಯ ಮುಗಿಲು
ಗೋಪಿಯರ ತಂಡದ ಮುಗಿಲು ಬಲ್ಲೆ
ಹರಿಗೋಲು ಹುಣ್ಣಿಮೆ ಹೊನಲು

ಬಳ್ಳಿಯ ಮನೆಯಂತೆ ಮುಗಿಲು ಅಲ್ಲಿ
ಹಳ್ಳಿಯ ಹಾಡಿನ ಹುಯಿಲು
ಹೆಣ್ಣಿಗೆ ಎಷ್ಟೊಂದು ದಿಗಿಲು ನಿಲ್ಲಿ
ಕೆನ್ನೆಗೆ ಹೂವಿನ ನೆಳಲು

ಕಿರುತಾರೆ ಮುಡಿದೊಂದು ಮುಗಿಲು ತನ್ನ
ಚೆಲುವಿಗೆ ಬೆರಗಾದ ಮುಗಿಲು
ಕೊಳಲನು ತುಟಿಗಿಟ್ಟ ಮುಗಿಲು ನಿನ್ನ
ತುಟಿ ನನ್ನ ಕೊಳಲೆನುವ ಮುಗಿಲು

ಬಾ ಬಾರೆ ಎನ್ನುವ ಮುಗಿಲು ಅಲ್ಲಿ
ಬರಲಾರೆನೆನ್ನುವ ಮುಗಿಲು
ಕೆನ್ನೆ ಕೆಂಪಾದೊಂದು ಮುಗಿಲು ಎಲ್ಲಿ
ಇನ್ನೊಂದು ಮುತ್ತೆನುವ ಮುಗಿಲು

ಶ್ರೀ ಕೃಷ್ಣನಂತೊಂದು ಮುಗಿಲು
ರಾಧೆಯಂತಿನ್ನೊಂದು ಮುಗಿಲು
ಅಲ್ಲೊಂದು ಇಲ್ಲೊಂದು ಮುಗಿಲು
ಮುಗಿಲೆಲ್ಲ ಕೃಷ್ಣನ ಕೊಳಲು

# ತೇರು ಬಂತು, ದಾರಿ

೧

ಗಾಲಿ ಉರುಳಿದಂತೆ—ಕಾಡಿನ
ಗಾಳಿ ಹೊರಳಿದಂತೆ—
ಬಾನ ದೇಗುಲದ
ಬೆಳ್ಳಿ ಗೋಪುರದ
ಘಂಟೆ ಮೊಳಗಿದಂತೆ,
ಹಾಲು ಕಂಚಿನ
ಹೊನ್ನ ಮಿಂಚಿನ
ಘಂಟೆ ಮೊಳಗಿದಂತೆ,
ಊರ ದಾರಿಯಲಿ
ಹೂವ ತೇರಿನಲಿ
ಕೃಷ್ಣ ಬರುವನಂತೆ !

೨

ಎತ್ತಿ ನೋಡು ಕಣ್ಣ, ಬಾನಿಗೆ
ಹತ್ತಿ ಹೊಳೆವ ಬಣ್ಣ!
ಬೆಳೆದ ಭಕ್ತಿಯೇ ಊರ ದೇವರಿಗೆ
ತೇರು ಆಯಿತಣ್ಣ !
ಗುಡಿಯ ಮುಟ್ಟದ
ಗುಡುಗು ಹುಟ್ಟುವ
ನಡೆದು ಬರುವ ಬೆಟ್ಟ!
ಗಿರಿಯನೆತ್ತಿದ
ಕೊಳಲ ಬಿತ್ತಿದ
ಕೃಷ್ಣ ಬಂದುಬಿಟ್ಟ,
ಚೆಲುವ ಬಂದುಬಿಟ್ಟ !

೩

ಗೋಪಿ ನೀನೆ ಧನ್ಯೆ !—ಕೃಷ್ಣ
ನಿನ್ನ ಕಂದನೇನೆ ?
ಇಲ್ಲಿ ನೋಡು ತಾನೇ ತನ್ನ
ತೇರನೇರಿದಾನೆ !
ಕೊಳಲ ಬಾರಿಸದೆ
ಜಗವ ತೋರಿಸದೆ
ಹಿಗ್ಗಿ ಬರುತಿದಾನೆ.
ಚರಣ ಚಂದ್ರಿಕೆಗೆ
ಜೀವ ಹಿಗ್ಗುತಿದೆ
ಕೃಷ್ಣ ಬರುತಿದಾನೆ—
ತೇರಮೇಲೆ ತಾನೆ.

೪

ತೇರು ಬಂತು ದಾರಿ—ದಾರಿ !
ಹಣ್ಣು ದವನ ಬೀರಿ !
ಬೀದಿ ತಿರುಗಿನಲಿ
ಜನದ ಕರಗಿನಲಿ
ತೇರು ಬಂತು ದಾರಿ !
ತಡೆದು ಗುಡುಗಿ ಬಹ
ದೊಡ್ಡ ತೇರು, ಅಹ !
ಬಿಡಿರಿ ಬಿಡಿರಿ, ದಾರಿ !
ಮುತ್ತ ಮೆಟ್ಟಿರುವ
ಮುಕುಟವಿಟ್ಟಿರುವ
ಕೃಷ್ಣ ಬಂದ, ದಾರಿ !

೫

ಸೆರಗ ಸೆಳೆದರಿಯ, ಬೆಣ್ಣೆ ಕದ್ದರಿಯ ;
ಚೆಲುವ ಬಂದ, ದಾರಿ !
ಹಣೆಯ ಕತ್ತುರಿಯ, ತಿಲಕದಚ್ಚರಿಯ
ಕಂದ ಬಂದ, ದಾರಿ !

# ಜಯದ್ರಥನ ಕೊಲೆ

ಅಭಿಮನ್ಯು ವಧೆಗೆ ಖತಿಗೊಂಡ ಪಾರ್ಥನ ಕಂಡು
ಅಪಾರ ಕೃಪೆಯಿಂದ ಶ್ರೀ ಕೃಷ್ಣ ನೆರವಿಗೆ ಬಂದು
ಸುದರ್ಶನವನೆಸೆಯಲಾ ಹಗಲ ಬಾನ್ಗೆ, ಅದು
ಮರೆಮಾಡಿತಂತೆ ಆ ಸೂರ್ಯಮಂಡಲವನು.

ರವಿ ಮುಳುಗಿ ರಾತ್ರಿಯಾಯಿತು ಎನುವ ಭ್ರಾಂತಿಯಲಿ
ತಲೆಯನೆತ್ತಿದ ಜಯದ್ರಥನ ತಲೆ ನಿಮಿಷದಲಿ
ನೆಲೆ ತಪ್ಪಿ, ದೂರದ ಸ್ಯಮಂತಪಂಚಕದೊಳಗೆ
ಧ್ಯಾನದೊಳಗಿದ್ದ ವೃದ್ಧಕ್ಷತ್ರನೂರುವಿಗೆ
ತಗುಲಿ, ಅವನನು ಕೊಂದು ಭೂಮಿಯಲಿ ಮಣ್ಣಾಯ್ತು:
ಅಲ್ಪ ಸಂಗತಿಗೆ ಕಲ್ಪನೆ ಕುದುರಿ ಕಥೆಯಾಯ್ತು.
ಮಾನವನ ಅನ್ಯಾಯವನು ಈಶ್ವರ-ಶಕ್ತಿ
ಹೀನಮಾರ್ಗದಲಿ ಅಂತೂ ಗೆದ್ದ ಉಪ-ಯುಕ್ತಿ
ದೇವರ ಹೆಸರಿನಲ್ಲಿ ಓ ಇದು ಅಚಾತುರ್ಯ !
ಬಿದ್ದವನು ಇಲ್ಲಿ, ಕಂಡಂತೆ, ಧರ್ಮದ ಸೂರ್ಯ !

# ದೀಪಾವಳಿ

ನಕ್ಕಂತೆ ಇರುವ ಸಿರಿಮೊಗವೆ !—ಅದಕೆ
ತಕ್ಕಂತೆ ಇರುವ ಕಣ್‌ಬೆಳಕೆ !—
ನಿಂತಂತೆ ಕಾಣುವ ನಿರಾತಂಕ ದೀಪವೆ !
ಅಂತರಂಗದ ಜೀವ ನದಿಯೆ !

ನಕ್ಕಂತೆ ಇರುವ ಸಿರಿಮೊಗವೆ !—ಹೂಗೆನ್ನೆ-
ಗುಕ್ಕುವಂತಿರುವ ನೊರೆಹಾಲೆ !
ತಂತಿಯಲಿ ಇಂಪು ಹರಿದಂತೆ ಈ ಮನೆಯೊಳಗೆ
ಸಂತಸದ ನೆಲೆಯಾದ ಚೆಲುವೆ !

ನಕ್ಕಂತೆ ಇರುವ ಸಿರಿಮೊಗವೆ !—ಚೆಂದುಟಿಗೆ
ಚಿಮ್ಮಿಬಹ ವೀಣೆಯೊಳದನಿಯೆ !
ತುಂಬು ಹೆರಳಲಿ ಹಿಡಿದ ಹಂಬಲದ ಹೊಸ ಹೂವೆ,
ಅಲ್ಲೆಲ್ಲ ನಿನ್ನ ಪರಿಮಳವೆ !

ದೀಪವನು ಹಚ್ಚಿ ಬಹ ಹೆಣ್ಣೆ !—ಆ ಬೆರಳೆ
ಮಿಂಚಿನಲಿ ಬಳ್ಳಿ ಬರೆದಂತೆ.
ಹಣತೆಗಳ ನಡುವೆ ಹೊಂಬೆರಳು ಹರಿದಾಡುತಿದೆ
ವೀಣೆಯಲಿ ಬೆರಳು ಬರುವಂತೆ.

ಎಷ್ಟೊಂದು ತಾರೆಗಳು ಮೇಲೆ, ಗಗನದಲಿ !—
ಎಷ್ಟೊಂದು ಬೆಳಕು ಭೂಮಿಯಲಿ !
ಹಬ್ಬದಲಿ ತೊಳೆದಿಟ್ಟ ಈ ಬದುಕೆ ಬೆಳಕಾಗಿ
ಹೂವಾಯ್ತು ನಿನ್ನ ಪ್ರೇಮದಲಿ.

ಹಣತೆಯನು ಹಚ್ಚಿ ಬಿಡು, ಬಾಗಿಲಲಿ ಇಟ್ಟು ಬಿಡು;
ನಿನ್ನಿಂದ ದೀಪಾವಳಿ.
ಬರುವ ಸಡಗರದಲ್ಲಿ ಮುತ್ತೊಂದ ಕೊಟ್ಟು ಬಿಡು,
ಕೊಡೆನೆಂದು ನಗುತ ಹೇಳಿ.

# ಬೆಳಗಿನ ತೋಟದಲ್ಲಿ

ಬಳ್ಳಿಯ ಬೆರಳಲಿ ಹೂವೊಂದಿತ್ತು
ಉಂಗುರವಿಟ್ಟಂತೆ.
ಹೂವಿನ ತುಟಿಯಲಿ ಹನಿಯೊಂದಿತ್ತು
ಮುತ್ತೊಂದಿಟ್ಟಂತೆ.

ನೀರಿನ ಹನಿಯೇ ಕಾಮನಬಿಲ್ಲಿನ
ಕಂಬನಿಯಾಗಿತ್ತು.
ಹೂವಿನ ಸುತ್ತಾ ಹರಡಿದ ಹುಲ್ಲಿನ
ಹಸುರಿನ ಹಾಸಿತ್ತು.

ಹನಿಗಳ ಹಿಡಿಯುತ ಕುಡಿಯುತ ಕೋಗಿಲೆ
ಬಾಯನು ತೆರೆದಿತ್ತು.
ಬಳ್ಳಿಯ ಹೂವಿನ ಬೆಳ್ಳಿಯ ಬಾಗಿಲೆ
ಹಾಡಿಗೆ ತೆರೆದಿತ್ತು.

ಭೂಮಿಯ ಉದಯದ ಭವ್ಯಾನಂದದ
ಮಣ್ಣಿನ ಹೊಸ ಗಾಳಿ
ಮೊದಲಿನ ಮಕ್ಕಳ ತೊದಲಿನ ಕೇಕೆಯ
ಉಂಗುರ ದನಿಗಳಲಿ

ಕರೆದಿದೆ: 'ನೋವೇ ಇಲ್ಲದ ಊರಿಗೆ
ಎಲ್ಲಾ ಬರಬಹುದು.'
ಕನಸಿನ ಹಸುವಿನ ಹಾಲೂ ಮಧುರವೆ ?
—ಹಾಗೂ ಇರಬಹುದು.

# ಶಿವರಾಮರಾಯರು

ಶಿವರಾಮರಾಯರು ಹೆಸರಾಂತ ಲಾಯರು,
ವ್ಯವಹಾರ ಭೂಮಿಯಲಿ ಕಾಮಧೇನು ;
ಬೆಟ್ಟಗಲ ಜರತಾರಿಯಂಚಿನ ರುಮಾಲೇನು,
ರಟ್ಟೆಯಷ್ಟೇ ಇರುವ ಮೀಸೆಯೇನು !

ಮೇಲ್ಮನೆಯ ಮೆಲ್ದನಿಯ ಶಿವರಾಮರಾಯರು.
ಮೈಬಣ್ಣ ಕೆಂಪಿನ ಗುಲಾಬಿಯಂತೆ ;
ಸತ್ಯವಂತರಿಗಿವರು ಸುಲಭದಲಿ ಲಾಯರು
ಇವರಿದ್ದ ಕಡೆ ಗೆಲ್ಲು ಸಿದ್ಧವಂತೆ.

ಶಿವರಾಮರಾಯರು ತುಂಬಿರುವ ಸಂಸಾರಿ ;
ಹತ್ತೂರ ಮುಂದಾಳು, ಮುತ್ತು ಇವರು.
ಕೈಹಿಡಿದ ಮಡದಿಯೋ ಸಂಕ್ಷಿಪ್ತ ಗಾಂಧಾರಿ.—
ಸಂಸಾರಸಾಗರವ ದಾಟುತಿಹರು.

ಶಿವರಾಮರಾಯರು ಅದೃಷ್ಟಶಾಲಿಗಳೆನ್ನಿ ! —
ಆಗರ್ಭ ಶ್ರೀಮಂತರೆನುವ ಬಿರುದು.
ಹತ್ತೂರ ಗೋಜೆಲ್ಲ ಇವರ ಮನೆ ಬಾಗಿಲಲಿ
ಇತ್ಯರ್ಥವಾಗುವುದು, ದಾರಿ ಹೊಳೆದು.

ಶಿವರಾಮರಾಯರು ತುಂಬ ಖಂಡಿತವಾದಿ ;
ಮಂದಹಾಸವೆ ಇವರ ಸಿರಿ ಬಾವುಟ.
ನಿರ್ಭಯದಿ ಬಳಸುವರು 'ಕೋಡು'ಗಳ ಕಾಡಿನಲಿ ;
'ಕೋರ್ಟಿ'ಗೂ ಹಿತವಂತೆ ಇವರಾವುಟ.

ರಜವಿದ್ದ ಸಂಜೆಯಲಿ ಒಳಮನೆಯ ಬೆಳಕಿನಲಿ
ಪುಸ್ತಕದ ಪಂಕ್ತಿಯಲಿ ವಲ್ಲಿ ಹೊದ್ದು ;
ಕನ್ನಡಕದಂಚಿನಲಿ ಚಿಗಿವ ಕಣ್ಮಿಂಚಿನಲಿ
ಮುದ್ದು ಮಗಳೇ ಇಳಿದು ಗುದ್ದುಕೊಡಲು,

ಪತ್ರ ಓದುತ್ತಲೇ ಚರ್ಚೆ ಮಾಡುತ್ತಲೇ
ಹೆಂಡತಿಯ ಸೂಚನೆಗೆ ಸನ್ನೆಮಾಡಿ,
ಒಂದೆ ನದಿ ಎರಡು ಎತ್ತರಗಳಲಿ ಹರಿವಂತೆ,
ಜೀವನವ ನಡಸುತ್ತ ಗೌರವದಲಿ,

ಗೆದ್ದವರನಾದರಿಸಿ ಸೋತವರ ಸಂತವಿಸಿ
ತಾವು ಎರಡೂ ಕಡೆಗೆ ಬಂಧುವೆನಿಸಿ
ದೇವರಿಗೆ ಕೈಮುಗಿಸಿ ಸ್ನೇಹಗಳ ತಲೆಯುಳಿಸಿ
ಅಲ್ಲಲ್ಲಿಗಂದಂದೆ ಗಂಟು ಬಿಡಿಸಿ,

ಶಿವರಾಮರಾಯರು, ಹೆಸರಾಂತ ಲಾಯರು
ತಮ್ಮ ಹೊರೆಯೇ ತಮ್ಮ ಬೆನ್ನಿಗಿರಲು,
ಸುಮ್ಮನಿರಲಾರದೆಯೆ ಅವರಿವರ ದುರಿತವನು
ಆಧುನಿಕ 'ಅಟ್ಲಾಸಿನಂತೆ' ಹೊತ್ತು—

ಭಗವಂತನಡಿಯಮೋಲಗಣಿತ ವ್ಯೂಹದಲಿ
ಬಣ್ಣ ಬಣ್ಣದ ಬುಗುರಿ ಆಡುತಿರಲು
ಕಂತೆಗಳು, ಚಿಂತೆಗಳು, ಸಂತೆಗಳು ಸುತ್ತಾಡಿ
ಇದ್ದಲ್ಲೆ ಬಿದ್ದಲ್ಲೆ ಬೀಳುತಿರಲು,—

ಹೋರಾಡುತಿರುವರು. ಪಾಪ! ಇವರೊಬ್ಬರು;
ತಲೆ ಬೆಳ್ಳಗಾಗಿಹುದು ತೊಂದರೆಯಲಿ.
ವಿಧಿನಿಯಮವಿದ್ದಂತೆ, ಹೋದ ಮಳೆ ಬಿದ್ದಂತೆ
ನಡೆವುದೂರಿನ ಬಾಳು ತೋರಿಕೆಯಲಿ.—

ಈ ನಡುವೆ ತಲೆಹಾಕಿ ಕಂಡ ಪಾತಾಳದಲಿ
ಕಾಲಿಟ್ಟು ಬೀಳುವುದು ಒಂದು ತಪ್ಪು.
ಕ್ಷೀರಸಾಗರವೆಂದು ಹಾಡಿರಲಿ ಕವಿತೆಯಲಿ,
ಕಡಲ ನೀರೆಲ್ಲೆಲ್ಲು ತುಂಬ ಉಪ್ಪು.

# ದೂರ್ವಾಸರಿಗೆ

ಮಹಾಭಾರತದ ಮಹಾಮುನಿಗಳಲಿ ದೂರ್ವಾಸ
ಅಪೂರ್ವ ನಿನ್ನ ಮಹಿಮೆ. ವ್ಯಾಸ, ಕುವರವ್ಯಾಸ
ಕಾಲ ಶಿಲೆಯಲ್ಲಿ ಕಡೆದಿಹರು ನಿನ್ನ ಅಶಾಂತ
ಗ್ರೀಷ್ಮ ಮಧ್ಯಾಹ್ನ ಮೂರ್ತಿಯನು. ಆರ್ಯಾವರ್ತ
ಒಂದು ಕಾಲದಲಿ ಆಶ್ರಮ ನಿಯಮ ಹದಗೆಟ್ಟು
ತ್ಯಾಗದ ಮುಖದ ಮೇಲೆ ಭೋಗದ ಬಂಗು ಬರಲು,
ನೀ ಬಂದೆ, ಋಷಿ ಕುಲವ ಶಾಪದಿಂದಲೆ ತೊಳೆದೆ,
ಬೆಳಗಿದೆ, ನಿಲ್ಲಿಸಿದೆ ಧರ್ಮಾಸನದ ಮೇಲೆ.—

ಮುಟ್ಟಿದರೆ ಮುನಿಯೆಂದು ದೂರುತ್ತಲೇ ಇರಲಿ
ನಿನ್ನ ನೆನೆಯಲು ಕೂಡ ಬಲವಿರದ ಹೆಂಬೇಡಿ,
ವರ ಕೊಡುವ ಸಣ್ಣ ಕರುಣೆಗೆ ತೊತ್ತೆ ನೀನು ?
ಶಾಪವೇ ನಿನ್ನ ಭಾಗ್ಯದ ಕಾಮಧೇನು.
ನೀನಿತ್ತ ಶಾಪದಿಂದಲೆ, ಶಾಪದಿಂದಲೇ
ಸರ್ವದಮನೋದಯದ ಕಂಡಳು ಶಕುಂತಲೆ.

# ಗಾಳಿ ಬೀಸುತ್ತಲೇ, ಬೀಸುತ್ತಲೇ ಇತ್ತು

೧

ಗಾಳಿ ಬೀಸುತ್ತಲೇ, ಬೀಸುತ್ತಲೇ ಇತ್ತು ;
ಬಿಸಿಲು ಉರಿಯುತ್ತಲೇ, ಉರಿಯುತ್ತಲೇ ಇತ್ತು ;
ಗುಡುಗಿ ಬಾನ್ ಮಿಂಚುರಿದು ಮಳೆ ಬೀಳುವಂತಿತ್ತು ;
ಇನ್ನೊಂದು ನಿಮಿಷದಲಿ ಮಳೆ ಗಾಳಿಯಾಗಿತ್ತು.

ಇನ್ನೊಂದು ನಿಮಿಷದಲಿ ಮಳೆ ಗಾಳಿಯಾಗಿತ್ತು :
ಗಾಳಿ ಬೀಸುತ್ತಲೇ, ಬೀಸುತ್ತಲೇ ಇತ್ತು ;
ಹೂಮುಡಿದ ಹುತ್ತದಲಿ ಹಾವು ಹೆಡೆ ತೆರೆದಿತ್ತು ;
ಹಳ್ಳ ಹರಿಯುತ್ತಲೇ, ಹರಿಯುತ್ತಲೇ ಇತ್ತು.

ಹಳ್ಳ ಹರಿಯುತ್ತಲೇ, ಹರಿಯುತ್ತಲೇ ಇತ್ತು ;
ಗಿಡದ ಹೂ ಒಂದೊಂದು ಉದುರುತ್ತಲೇ ಇತ್ತು ;
ಗಾಳಿ ಬೀಸುತ್ತಲೇ, ಬೀಸುತ್ತಲೇ ಇತ್ತು ;
ಉಣಿಸಿಲ್ಲದೂರಿನಲಿ ಮಧ್ಯಾಹ್ನವಾಗಿತ್ತು.

ಉಣಿಸಿಲ್ಲದೂರಿನಲಿ ಮಧ್ಯಾಹ್ನವಾಗಿತ್ತು ;
ಹುಟ್ಟಬಾರದ ಕಂದ ತೊಟ್ಟಿಲಲಿ ಮಲಗಿತ್ತು ;
ಸಂತೋಷವೊಂದಿರದ ಸಂಸಾರ ಬೆಳೆದಿತ್ತು ;
ಗಾಳಿ ಬೀಸುತ್ತಲೇ, ಬೀಸುತ್ತಲೇ ಇತ್ತು.

೨

ಗಾಳಿ ಬೀಸುತ್ತಲೇ, ಬೀಸುತ್ತಲೇ ಇತ್ತು ;
ಮನೆ ಮನೆಯ ಮುಂದೆಲ್ಲ ಭಿಕ್ಷುಕರ ದಂಡಿತ್ತು ;
ಪೆಟ್ಟಿಯಲಿ ಬತ್ತ ಪಾತಾಳವನು ಕಂಡಿತ್ತು ;
ಗಂಟಲೋ ತಂಬಟೆಯೊ ತಾಳವೋ ಕೊಂದಿತ್ತು.

ಗಂಟಲೋ ತಂಬಟೆಯೊ ತಾಳವೋ ಕೊಂದಿತ್ತು ;
ಗಾಳಿ ಬೀಸುತ್ತಲೇ, ಬೀಸುತ್ತಲೇ ಇತ್ತು ;
ಚಾಟಿಯು ಛಟೀರೆನಿಸಿ ಮಾರಿಯೂ ಬಂದಿತ್ತು ;
ದಾಟಿ ಹೋಗಲು ದಾರಿ ಸುತ್ತಲೂ ಕಟ್ಟಿತ್ತು.

ದಾಟಿ ಹೋಗಲು ದಾರಿ ಸುತ್ತಲೂ ಕಟ್ಟಿತ್ತು ;
ಒಂದು ಹಿಡಿ ಅನ್ನಕ್ಕೆ ಬಾಳು ಆಳಾಗಿತ್ತು ;
ಗಾಳಿ ಬೀಸುತ್ತಲೇ, ಬೀಸುತ್ತಲೇ ಇತ್ತು ;
ಕುಳಿಬಿದ್ದ ಮುದಿಕೆನ್ನೆ ಕೆಟ್ಟ ನಗೆ ಬೀರಿತ್ತು.

ಕುಳಿಬಿದ್ದ ಮುದಿಕೆನ್ನೆ ಕೆಟ್ಟ ನಗೆ ಬೀರಿತ್ತು ;
ಉಸಿರಿಲ್ಲದೊಂದು ಉತ್ಸವ ಮುಂದೆ ಸಾಗಿತ್ತು ;
ನಗೆಯಿರದ ಬಲವಿರದ ಶಾಂತಿ ಕೈಮುಗಿದಿತ್ತು ;
ಗಾಳಿ ಬೀಸುತ್ತಲೇ, ಬೀಸುತ್ತಲೇ ಇತ್ತು.

# ಸೀತೆಯ ಭಾಗ್ಯ

ಸೀತೆಯೇ ಲೋಕಕ್ಕೆ ತಾಯಿ. ಸಾವಿರ ರಾಮ
ತೂಗುವರೆ ಇವಳ ತೂಕಕ್ಕೆ ? ರಾಮಾಯಣದ
ಅಂಕಿತವೆ ಒಂದು ಅನ್ಯಾಯ ಸೀತೆಯ ಕಥೆಗೆ.
ಯಾರಿಗಾ ಸೇತುಬಂಧನ ? ಸೀತೆಯ ವ್ಯಥೆಗೆ ?
ಯಾರಿಗಾ ರಾಕ್ಷಸ ವಿನಾಶ ? ಯುದ್ಧ ಮುಗಿಯಲು,
ಸೆರೆತೆರೆದು ಬಂದ ಮಡದಿಯನು ಕೈಹಿಡಿದವನು
ಸಂಶಯದ ಓರೆಗಣ್ಣಿನಲಿ ನೋಡಿದವೇಲೆ
ಇನ್ನಾವ ಭಾಗ್ಯ ಉಳಿದಿತ್ತು ಸೀತೆಗೆ ? ಇದಕೆ
ಲೋಕವನು ಒಪ್ಪಿಸುವ ಕುಂಟು ಕಾರಣವೇಕೆ ? . . .
ಬೆಂಕಿಯಲಿ ನಿಂತು ಬೆಳ್ದಿಂಗಳಾದಳು ಸೀತೆ.

ಮಹಾಲಕ್ಷ್ಮಿ ಸೀತೆ. ಗಂಡಿಗೆ ಬಂದ ಸಂಶಯವೆ
ಹೆಣ್ಣಿಗೂ ಬಂದು, ಒಂದೇ ಮಾತನಾಡಿದಳೆ ?
ಲೋಕ ಸಮ್ಮತಿಯ ಬೇಡಿದಳೆ ? ಹೂ ಬಾಡದೆಯೆ,
ಬಂದು ನಿಂತಳು ನಗುತ ರಾಘವನ ಜೊತೆಗೆ.

# ಅನ್ನದ್ ತಪ್ಲೆ

ಹುಟ್ಟಿದ್ ಮಳೇ ಹಾಳಾಗ್‌ಹೋಯ್ತು,
ಸುಮ್ನೇ ಗುಡುಗಿನ್ ಕೋಡಿ.—
ಅಕ್ಕೀ ಬೆಲೇ ಏರ್ತಾ ಹೋಯ್ತು
ದುಡ್ಡಿನ್ ಮೊಕಾ ನೋಡಿ.

ಅಕ್ಕೀಗಿಂತ ಅಲ್ಲಿದ್ ಕಲ್ಲೆ
ಮುತ್ನಂಗಿತ್ತು, ತಣ್ಗೆ !
ಕಟ್ಕೊಂಡೋಳ್ಗಿಂತಿಟ್ಕೊಂಡೋಳೇ
ಸುಂದ್ರೀ ಅಲ್ವೆ ಕಣ್ಗೆ !

ಒಲೇ ಕುರ್ಚೀಲನ್ನದ್ ತಪ್ಲೆ
ತಲೇ ತೂಗ್ತಾ ಇತ್ತು :
ಅಕ್ಕೀ ಮೊಕಾ ನೋಡಿದ್ ಕೂಡ್ಲೆ
ಕುಣ್ಯೋದ್ ನಿಂತೇ ಹೋಯ್ತು !

ಅಕ್ಕೀ ಮೊಕಾ ಚಿಕ್ದಾಗ್‌ಹೋಯ್ತು
ತಂದೋರ್ ತೊಂದ್ರೇ ನೋಡಿ ;
ನಕ್ಕೋರ್ ಮೊಕಾ ಮೂರ್ಕಾಸಾಯ್ತು
ಇದ್ದೋರ್ ಸಂಕ್ಟಾ ನೋಡಿ.

ಒಲೇ ಊದಿ – ತಲೇಗ್ ಬೂದಿ—
ಅಂತೂ 'ಅನ್ನಾ' ಅಂದ್ರು ;
ಕಸಾ ಗುಡ್ಸೀ ತಟ್ಟೇ ಹಾಕೀ
ಊಟಕ್ಕೆಲ್ಲಾ ಬಂದ್ರು.

ತೊಂಬತ್ತೊಂಬತ್ ಅಕ್ಕೀ ಬೆಂದ್ರೂ
ಬೆಂದಿರ್ಲಿಲ್ಲ ಕಲ್ಲು !
ಉಣ್ತಾ ಇದ್ದೋರ್ ಹೊಡಿಯಾಕ್ ಬಂದ್ರೂ . . .
ಕಲ್-ಕಡಿದಿತ್ತು ಹಲ್ಲು !

# ಮಾಸ್ತಿಯವರ ಕವಿತೆ

'ಮಾಸ್ತಿಯವರಾಸ್ತಿ ಆ ಸಣ್ಣ ಕತೆಗಳೆ' ಎಂದು
  ಸಾಂಬಶಾಸ್ತ್ರಿಗಳ ಸಿದ್ಧಾಂತ. ಕೇಶವಮೂರ್ತಿ
'ಶ್ರೀನಿವಾಸರ ಕವಿತೆ ಒಣ ಗದ್ಯವೇ' ಎಂದು
  ಎಗರಿ ಬೀಳುವನು. ಈ ಸಂಶಯವೆ ಕವಿಕೀರ್ತಿ.
ಪರಿಚಿತ ಕವಿಗಳೆಲ್ಲ ಬರಿದೆ ರಾರಾಜಿಪರು
ಪ್ರಾಚೀನ ಪ್ರಾರಬ್ಧ ಹೊತ್ತು. ಅದ ಹೊಗಳುವರು
ಶ್ರೀನಿವಾಸರ ಕೃತಿಯನೇನೆಂದು ಮೆಚ್ಚುವರು?
ಗಡವಿಲ್ಲ, ದಲ್ಲಿಲ್ಲ, ಮೇಣ್-ಬತ್ತಿ ಹೊಗೆಯಿಲ್ಲ;
ಅಪ್ರಕೃತ ಸಂಸ್ಕೃತದವಾಂತರದ ಧಗೆಯಿಲ್ಲ.—
ಇಲ್ಲಿ ಜೀವನದಂತೆ ಕವಿತೆ: ಜೀವದ ಉಸಿರು
ಮಳೆಬಿದ್ದ ಸಂಜೆ ಬೀದಿಯಲಿ ಸಾವಿರ ಬೆಳಕು,
ಹಸುರು ನಗೆ, ಕೆಂಪು ಗಾಯಗಳು. ಬಂಡೆಯನುತ್ತು
ಬೆಳೆದ ಮೂಗಿಂಗೆ ಈ ಸಹಜ ಕವಿತೆಯ ಮುತ್ತು
ಗ್ರಾಹ್ಯವಾದೀತೆ? ಇದಕಿಲ್ಲ ಕವಿತೆಯ ಹೆಸರು!

# 'ಶ್ರೀ' ಅವರಿಗೆ

ಪ್ರಸನ್ನ ಶರದಿಂದುಮಂಡಲದಂತೆ 'ಶ್ರೀ' ಗುರುವೆ
ನೀವೆನ್ನ ಹೃದಯಪೀಠವನೇರಿದಂತೆನಗೆ
ನಿಮ್ಮ ಸಂಸ್ಮರಣೆ. ನಿಮ್ಮಿಂದ ಸಂಪನ್ನ ಜೊತೆಗೆ
ಬಂದರಾ ಷೇಕ್ಸ್‌ಪಿಯರ್ ಸಾಫೊಕ್ಲೀಸ್ ಭಾಸರೆ ;
ದೈವಹತ ಧನ್ಯಾತ್ಮನಾದನಶ್ವತ್ಥಾಮನ್.
ಇತ್ತ 'ಇಂಗ್ಲಿಷ್ ಗೀತೆ' ಹೊಸತೊಂದು ಲೋಕವನ್
ಕನ್ನಡದ ಕಣ್ಗೆ ತೆರೆದಿತ್ತು ಸಂಪ್ರೀತಿಯಲಿ.
ನಿಮ್ಮ ಸಿಂಹಧ್ವನಿಯೆ ಸಂಜಾಯ್ತು ಪಯಣದಲಿ.

ಈಗ, ನೀವಂದು ಮುತ್ತಿಟ್ಟು ಮಿಾರಿದ ನೆಲವೆ
ನಿಮ್ಮ ನೆನೆವಂತೆ ನನ್ನೆಣಿಕೆ. ಅಂತಿರಬಹುದೆ?
ಜ್ವಲಿಸುವ ವಸಂತವಿದೆ, ತಿಳಿನೀಲಿ ಗಗನವಿದೆ
ಆರೆ ಯಾವುದಿಲ್ಲಿ? ಆರೆ ನಿಮ್ಮ ದನಿಯೊಂದೆ!
ನಿಮ್ಮ ಸಿರಿ ದನಿಯೊಂದೆ, ಆರೆ ನಿಮ್ಮ ದನಿಯೊಂದೆ.
ಆರಕೆಯನೆ ಸರ ಕಟ್ಟಿ ನಿಮ್ಮಡಿಗಳಿಗೆ ತಂದೆ.

# ನಿನ್ನ ಹೆಸರು

ಸಿರಿಗೆರೆಯ ನೀರಲ್ಲಿ ಬಿರಿದ ತಾವರೆಯಲ್ಲಿ
ಕೆಂಪಾಗಿ ನಿನ್ನ ಹೆಸರು.
ಗುಡಿಯ ಗೋಪುರದಲ್ಲಿ ಮೆರೆವ ದೀಪಗಳಲ್ಲಿ
ಬೆಳಕಾಗಿ ನಿನ್ನ ಹೆಸರು.

ಜೋಯಿಸರ ಹೊಲದೊಳಗೆ ಕುಣಿವ ಕೆಂಗರುವಿನ
ಕಣ್ಣಲ್ಲಿ ನಿನ್ನ ಹೆಸರು.
ತಾಯ ಮೊಲೆಯಲ್ಲಿ ಕರು ತುಟಿಯಿಟ್ಟು ಚೆಲ್ಲಿಸಿದ
ಹಾಲಲ್ಲಿ ನಿನ್ನ ಹೆಸರು.

ಹೂಬನದ ಬಿಸಿಲಲ್ಲಿ ನರ್ತಿಸುವ ನವಿಲಿನ
ದನಿಯಲ್ಲಿ ನಿನ್ನ ಹೆಸರು.
ಹೊಂದಾಳೆ ಹೂವಿನಲಿ ಹೊರಟ ಪರಿಮಳದಲ್ಲಿ
ಉಯ್ಯಾಲೆ ನಿನ್ನ ಹೆಸರು.

ಮರೆತಾಗ ತುಟಿಗೆ ಬಾರದೆ ಮೋಡ ಮರೆಯೊಳಗೆ
ಬೆಳ್ದಿಂಗಳೋ ನಿನ್ನ ಹೆಸರು.
ನೆನೆದಾಗ ಕಣ್ಣಮುಂದೆಲ್ಲ ಹುಣ್ಣಿಮೆಯೊಳಗೆ
ಹೂಬಾಣ ನಿನ್ನ ಹೆಸರು.

ನೀನೇ ಎದುರಿಗೆ ಬಂದಾಗ ನಿನ್ನಲ್ಲೆ
ಕರಗುವ ಬಲು ಚಿಕ್ಕ ಹೆಸರು.
ನೀನಿಲ್ಲದಾಗ ಈ ಮನೆಯಲ್ಲೆ ಮನದಲ್ಲೆ
ಹೊಳೆಗಾಳಿಯಂತಲೆವ ಹೆಸರು.

# ಈ ಶಿಕ್ಷೆ ಯಾರಿಗೆಂದು?

ಹಾಸಿಗೆಯ ಹರಸಿರುವ ದುಂಡುಮಲ್ಲಿಗೆಯರಳೆ,
ಆ ತುಂಬು ಹೆರಳ ಹೆಣ್ಣೆಲ್ಲಿ ?
ಬಿಳಿ ದಿಂಬಿನಂಚಿನಲಿ ಗೆರೆ ಬರೆದ ಕಾಡಿಗೆಯೆ,
ಆ ದೀಪದುರಿಯ ಕಣ್ಣೆಲ್ಲಿ ?

ಅತ್ತ ಮಂಚದ ಕೆಳಗೆ ಬಿದ್ದ ಕಾಲುಂಗುರವೆ,
ಆ ನವಿಲನಡೆಯ ಹೆಣ್ಣೆಲ್ಲಿ ?
ಬೆಳ್ಳಿ ಬಟ್ಟಲಿನೊಳಗೆ ಬಿಟ್ಟೊಂದು ಹನಿ ಹಾಲೆ,
ನೀ ಕಂಡ ನನ್ನ ಕನಸೆಲ್ಲಿ ?

ಎದುರು ಹಾಸಿನಮೇಲೆ ತೆರೆದಿಟ್ಟ ವೀಣೆಯನು
ಮಿಡಿದ ಆ ಮಿಂಚು ಬೆರಳೆಲ್ಲಿ ?
ತನ್ನ ಹಾಡಿಗೆ ತಾನೆ ಒಲಿದು ತಲೆದೂಗಿರಲು
ಗೋಡೆಯಲಿ ತೊನೆದ ನೆರಳೆಲ್ಲಿ ?

ತೆರೆದ ಪೆಟ್ಟಿಗೆ ಇಹುದು ತೆರೆದಂತೆ ; ಬಾಚಣಿಗೆ
ಕನ್ನಡಿಗೆ ಕಥೆಯ ಹೇಳುವುದು ;
ಉರಿಯುತ್ತಲೇ ಇಹುದು ದೇವರೆದುರಿಗೆ ಹಣತೆ ;
ಮನೆಯೇನೊ ತುಂಬಿದಂತಿಹುದು.

ಮನೆಯೇನೊ ತುಂಬಿದಂತಿಹುದು; ಸುಳ್ಳು ! ಇಲ್ಲ !–
ಸಾಕ್ಷಿಗಳ ನಂಬುವಂತಿಲ್ಲ.
ಈ ನೋಟದೊಳನೋವ ದೇವರೊಬ್ಬನೆ ಬಲ್ಲ !
ಗೌರಿ ಮನೆಯೊಳಗೆ ಇಲ್ಲ ! —

ತಾಯಿ ಕರೆದರು ಎಂದು, ಹೋಗಿಬರುವೆನು ಎಂದು,
ಸಂಜೆಗೂ ಮುಂದಾಗಿ ಬರುವೆನೆಂದು
ಬೆಳಗಾಗ ನಡೆದವಳು—ಈಗ ತುಂಬಿದ ಇರುಳು—
ಬಂದಿಲ್ಲ. ಈ ಶಿಕ್ಷೆ ಯಾರಿಗೆಂದು ?

# ನನ್ ಚಿನ್ನ

“ಗಂಡಯ್ಯ, ಗಂಡಯ್ಯ, ಬಿಡು ನಿನ್ನ ಚಿಂತೇಯ ?
ಪರದಾಟ ಸಾಕಿನ್ನು, ಮಹರಾಯ !
ನಾ ನಿನ್ನ ಕೈಹಿಡಿದ ಹೆಂಡತಿಯೆ ಆಗಿರಲಿ,—
ನಿನ್ನ ಮನೆಯಾಳಲ್ಲ, ಸ್ವಾಮಿ !”

ಎರಡರಲಿ ಒಂದೇನೊ ಆಳಾಗಿ ಇರಬೇಕು,
ನನ್ನ ಚಿನ್ನಾ, ಓ ನನ್ನ ಚಿನ್ನಾ !
ಆ ಆಳು ಗಂಡಿರಲೆ ? ಹೆಣ್ಣಿರಲೆ ?—ಹೇಳಿಬಿಡು,
ನನ್ನ ಕೈಹಿಡಿದ ರನ್ನಾ !

“ಗಂಡಯ್ಯ, ಇನ್ನೂ ಇಹುದೆ ಈ ಹಳೆ ಬಿಂಕ
ಅರಸುತನ, ಆಳಬಾಳೆಂಬ ?
ನಾ ನಿನ್ನ ತೊರೆದೇನು ! ಹಿಡಿ ನಿನ್ನ ಕಡೆ ಸುಂಕ ;
ಕೈಮುಗಿದೆ ;—ಇರಲಿ ಆ ಜಂಬ !”

ನೀ ತೊರೆಯೆ ನಾ ಕೆಟ್ಟೆ, ನೀರಿರದ ಗೋಕಟ್ಟೆ,
ನನ್ನ ಚಿನ್ನಾ, ಓ ನನ್ನ ಚಿನ್ನಾ !
ಬರುವುದೆಲ್ಲಾ ಬರಲಿ, ಗಂಡು ನಾನಂಜುವೆನೆ,
ನನ್ನ ಕೈಹಿಡಿದ ರನ್ನಾ ?

“ಅಯ್ಯೊ ! ನನ್ನೆದೆ ಮುತ್ತೆ ನೀನೊಡೆದು ಹೋಗುವೆಯ ?–
ಮಿತ್ತು ಹತ್ತಿರವಾಯ್ತೆ ನನಗೆ ?
ಮಣ್ಣಿನಲಿ ಕುಳಿ ತೆಗೆದು ನೀನೆನ್ನನಿಡುವಾಗ,
ಗಂಡಯ್ಯ, ಒದಗೀತೆ ಸಹನೆ !”

ದೇವರಲಿ ನನಗಿವೆ ಅಪಾರ ನಂಬಿಕೆ ಭಕ್ತಿ,
ನನ್ನ ಚಿನ್ನಾ, ಓ ನನ್ನ ಚಿನ್ನಾ !
ಒದಗೀತು ನನಗಂಥ ಅಳಲ ದಾಟುವ ಶಕ್ತಿ
ನನ್ನ ಕೈಹಿಡಿದ ರನ್ನಾ

"ಅಂತಾದರಳಿವಿನ ಮಹಾ ಮೌನದೊಳಗಿಂದ
ನಾ ನಿನ್ನ ಶಾಂತಿಯನು ಕಾಡ ಬಹೆನು ;
ನಿದ್ದೆಯಲಿ ಮುಳುಗಿರುವ ನಿನ್ನ ಹಾಸಿನ ಸುತ್ತ
ಬೊಮ್ಮರಕ್ಕಸಗಳನು ಕುಣಿಸ ಬಹೆನು."
ನಾನಾಗ ನಿನ್ನಂಥ ಸತಿಯ ಕೈ ಹಿಡಿಯುವೆನು
ನನ್ನ ಚಿನ್ನಾ, ಓ ನನ್ನ ಚಿನ್ನಾ !
ಅವಳ ಕಣ್ಣಿಗೆ ಹೆದರಿ ನರಕವೇ ಓಡುವುದು
ನನ್ನ ಚಿನ್ನಾ, ಓ ನನ್ನ ಚಿನ್ನಾ !

—ROBERT BURNS: *My Spouse Nancy*

# ಎಳೆದೂ, ಎಳೆದೂ ಇರುಳು

ಎಳೆದೂ, ಎಳೆದೂ ಇರುಳು,
ತೂಗಿ ತಡೆದೂ ಬೆಳಗು,
ನನ್ನೀ ಕೈಹಿಡಿದವಳು
ಹಾಸಿಗೆ ಹಿಡಿದಿರಲು.

ಓಡಿಸಲಳವೇ ಚಿಂತೆ,
ಬಿಡುವೇ ಬಳಲಿಕೆಗೆ,
ನನ್ನೀ ಜೀವದ ಕಣ್ಣು
ಹಾಸಿಗೆ ಹಿಡಿದಿರಲು ?
ಎಳೆದೂ, ಎಳೆದೂ....

ಭರವಸೆ ಒಂದೂ ಇಲ್ಲ ;
ಅಂಜಿಕೆ ಭಯವೇ ಎಲ್ಲ.
ಕಣ್ಣಿಗೆ ನಿದ್ದೆಯು ಮಾರಿ ;
ತೆರೆಯುವ ಕನಸೆ ವಿಕಾರಿ.
ಎಳೆದೂ, ಎಳೆದೂ....

ಕಿವಿಗೊಡು ಭಗವತ್ಕೃಪೆಯೇ,
ಕರುಣೆಯನೂಡಿಸು ನನಗೆ,
ಉಳಿದುದು ಎಲ್ಲಾ ನಿನಗೆ—
ಕಮಲೆಯನುಳಿಸಿಡು ನನಗೆ.
ಎಳೆದೂ, ಎಳೆದೂ....

—ROBERT BURNS : *On Chloris being ill*

# ನನ್ ಲಚ್ಮಿ

ಹಾಗೇ ನೋಡ್ತಾ ನೋಡ್ತಾ ಹೋದ್ರೆ
ನನ್ ಲಚ್ಮೀನೆ ಒಳ್ಳ್ಯೋಳು ।
ಘಟ್ಯಾಗೇನೊ ಮಾತಾಡ್ತಾಳೆ
ಆದ್ರೂನೂವೆ ಒಳ್ಳ್ಯೋಳು ॥

ಅವ್ಳು ಬಂದು ಸಿದ್ದೇ ಎಡ್ವಿ
ಹದ್ನಾರ್ ವರ್ಷ ಹಾರ್ಹೋಯ್ತು ।
ಸೇತ್ವೇ ಕೆಳ್ಗೆ ಕಲ್ಮಣ್ ಮುಚ್ಚಿ
ಹೊನ್ನೀರ್ ಕಾಲ್ವೆ ತುಂಬ್ಹೋಯ್ತು ॥

ತುಂಬಿದ್ ಕಾಲ್ವೆ ತೋಟಕ್ ನುಗ್ಗಿ
ಚಿನ್ನದ್ ಸೊಪ್ನಾ ಸುರ್ದಿತ್ತು ।
ಬೇಲೀ ಸುತ್ತಾ ಹೂವಿನ್ ಸುಗ್ಗಿ
ಜೀವದ್ ಕಣ್ಣೇ ತೆರ್ದಿತ್ತು ॥

ಹಳ್ಳ್ಯೋಳೂಂತಾ ಅನ್ನೋರನ್ಲಿ
ಒಳ್ಳೇ ಹೆಂಡ್ತಿ ನನ್ ಲಚ್ಮಿ ।
ಬೆಳ್‌ಬೆಳ್‌ಗಿದ್ದೋರ್ ಬೆಳ್ಕೊಂಡ್‌ಬರ್ಲಿ
ಪಚ್ಚೇ ಬಳ್ಳಿ ನನ್ ಲಚ್ಮಿ ॥

ತೊಟ್ಲೊ ಬಟ್ಲೊ ತಂದೋರ್ಯಾರು
ಅವ್ಳೇ ತಾನೆ ನನ್ ಲಚ್ಮಿ ।
ಬಿಸ್ಲಲ್ ಮಳೇಲ್ ನಕ್ಕೋರ್ಯಾರು
ನೊಂದೋರ್ಯಾರು ನನ್ ಲಚ್ಮಿ ॥

ಹನ್ನೊಂದ್ ಘಂಟೇಗನ್ನಾ ಹಾಕಿ
ಕಾಪಾಡೋಳೇ ನನ್ ಲಚ್ಮಿ ।
ಮಕ್ಕಳ್ನೆಲ್ಲಾ ತೂಗಿ ಸಾಕಿ
ಬೆಳ್ಸೋ ದೇವ್ರೆ ನನ್ ಲಚ್ಮಿ ॥

ಜೊತೇಲ್‌ಬಂದು ಮರೇಲ್‌ನಿಂತು
ನನ್ನೇ ನೋಡ್ತಾಳ್ ನನ್‌ಲಚ್ಮಿ ।
ಮೋಡದ್‌ಮರೇಲ್ ಮುಂಗಾರ್‌ಮಿಂಚು
ಹಾಡಿನ್ ತುಂಬಾ ನನ್ ಲಚ್ಮಿ ॥

# ಉಸಿರಿನ ಹಡಗು

ಕಾಲದ ಕಡಲಲಿ ಉಸಿರಿನ ಹಡಗು
ತೇಲುತ ನಡೆದಿದೆ ಹಗಲೂ ಇರುಳೂ ;
ನೀರಲಿ ತೆರೆದಿದೆ ನಿಲ್ಲದ ದಾರಿ.—
ಎಲ್ಲಿಂದೆಲ್ಲಿಗೆ ಇದರ ಸವಾರಿ !

ಕಾಮನ ಕೋರುವ ಕಣ್ಣು ಇದಕ್ಕೆ,
ಬಯಕೆಯು ಬೀರುವ ಬಾವುಟ-ರೆಕ್ಕೆ,
ಕ್ಷುಧಾಗ್ನಿ ಹೊರಳುವ ತುಂಬದ ಹೊಟ್ಟೆ:
ಹಾಹಾಕಾರದ ಹೆಬ್ಬುಲಿ-ರಟ್ಟೆ.

ಮುಡಿಯಲಿ ಗರ್ವದ ಹೊಗೆಯು ಕಿರೀಟ,
ಮುಖದಲಿ ತಂಗಿದೆ ಮಕ್ಕಳ ನೋಟ,
ಸುತ್ತಾ ಉತ್ತೇಸೆದಲೆಗಳ ಕಾಟ;
ಮರುಭೂಮಿಯಲಿದು ತೆಂಗಿನ ತೋಟ.

ಮಗುವಿದೆ ತಳ್ಳಿದ ಕಾಲಿಗೆ ಬಿದ್ದು ;
ತಂದೆಯು ಉತ್ತರ : ಮತ್ತೂ ಗುದ್ದು.
ಈ ಗತಿಯೇ ಹೆತ್ತವಳೇ ಇದ್ದೂ ?—
ಕರುಣೆಯು ಕರುಳಲಿ ಹುಟ್ಟದ ಸದ್ದು.

ಇನಿಯನ ಎದೆಯಲಿ ಕೆನ್ನೆಯನಿಟ್ಟು
ಕಣ್ತೆರೆವಿನಿಯಳ ಚೆಲುವನು ತೊಟ್ಟು
ತುಂಬುತ್ತಲೆಯಿರೆ ಹಡಗಿನ ರೂಪ,
ಕಡಲಿನ ಕಣ್ಣಿಗೆ ಏಕೋ ಕೋಪ !

ಉಸಿರಿನ ಹಡಗಿದು, ಏನಿದರರಕೆ ?
ಉಸುರುವಂತಿಲ್ಲ.—(ಉಳಿಯುವ ಬಯಕೆ ?)
ಬರಿ ಕನಸಿದು,–ನಗೆ ನೋವಿನ ಬೆರಕೆ ;—
ಅದೊ ! ನೀರಿನ ಬಿರುಗಾಳಿಯ ಗೊರಕೆ.

ಹಡಗಿನ ಪಾಡಿಗೆ ಕಡಲೇ ನಕ್ಕು
ನೀರಿನ ಕೆನ್ನೆಗೆ ಬಂದಿದೆ ಸುಕ್ಕು.
ತೇಲುವ ಬಾಳಿಗೆ ಯಾರೋ ದಿಕ್ಕು ?
ಬೇಕು ಅದೃಷ್ಟವೆ ತೇಲುವುದಕ್ಕೂ !

ತೇಲುವುದೆಲ್ಲಾ ತೇಲುತ್ತಿರಲಿ !
ಮುಳುಗುವುದೋ ? ಸರಿ, ಮುಳುಗುತ್ತಿರಲಿ !
ರವಿಯೂ ಮುಳುಗಲಿ ! ಶಶಿಯೂ ಮುಳುಗಲಿ !
ಗ್ರಹತಾರೆಗಳೂ ಸುಮ್ಮನೆ ಮುಳುಗಲಿ !—

ದಿಗ್ದಿಕ್ತಟಗಳ ಒಳಗೂ ಹೊರಗೂ
ನೀಲ ನೀಳ ನಾಲಗೆಗಳನೆಸೆದು,
ಜೀವದಾಸೆಗಳನೆಲ್ಲಾ ತೊಡೆದು,
ಎಲ್ಲಾ ಮುಗಿದರೆ, ತಾನೇ ಉಳಿದು,

ತುಂಬಿ ತುಳುಕುತಿದೆ ಕಾಲ ಸಮುದ್ರ ;
ಬದುಕಬಲ್ಲವನು ಒಬ್ಬನೆ, ರುದ್ರ.
ತೇಲಬಹುದು ಈ ತುಂಬಿದ ಹಡಗು.
ನಾಳೆ ಇದರ ಮನೆ ಆಳದ ಕೊರಗು.—

ಕಾಲದ ಕಡಲಲಿ ಉಸಿರಿನ ಹಡಗು
ತೇಲುತ ನಡೆದಿದೆ ಹಗಲೂ ಇರುಳೂ ;
ನೀರಲಿ ತೆರದಿದೆ ನಿಲ್ಲದ ದಾರಿ.
ಎಲ್ಲಿಂದೆಲ್ಲಿಗೆ ಇದರ ಸವಾರಿ ?

# ಪಂಪನಿಗೆ

ಮೃದು ಪವನ ಪರಿಮಳದ ಅರಿಕೆಗೆಚ್ಚರಗೊಳಲಿ
ಸುಮವೀಣೆ! ಆ ವೀಣೆಯಿಂಚರದ ಕನಸಿನಲಿ
ತೆರೆತೆರೆ ತೆರೆಯಲೊಂದು ರೂಪಕ ಸರೋವರಂ!
ಅಲ್ಲುಲಿವ ರಾಜಹಂಸಗಳ ಪಲ್ಲವಿ 'ಪಂಪಂ'!

ಪಂಪ, ನಿನ್ನಿಂಪಿನಚ್ಚರಿಯು ನುಡಿವೆಳಗಿನಿಂ–
ದರಳ್ವ ಮಲ್ಲಿಗೆ ಮಾವು ಕರ್ಬು ಗಿಳಿ ತುಂಬಿಗಳ
ಜಲ್ಲೆನುವ ಜಲದ ಕಾಡಿನ ಸೊರ್ಕಿದಾನೆಗಳ
ಬನವಾಸಿಬಳಗದೊಲ್ಮೆಯೆ ನಿನ್ನ ಸ್ಮಾರಕಂ!

ಕಾದದೆ ಇಳೆಯು ಕುಡದ ಕೌರವೇಂದ್ರನ ಛಲಂ,
ಛಲಂ ಕುಲಂ ಎಂಬ ವೀರಕರ್ಣಾಮೃತಂ,
ಚಕ್ರಮಂ ಪಿಡಿಯೆನೆಂಬಾ ಚಕ್ರಿ ಚಕ್ರಮಂ
ತುಡುಕುವಂತಾಗಿಸಿದ ಗಾಂಗೇಯಪೌರುಷಂ,—

ಲೋಕೋತ್ತರಂ ನಿನ್ನ ಲೌಕಿಕಂ. ಅಮೇಯಂ
ಚಿರಂ ಸ್ಥಿರಂ ನಿನ್ನ ವಿಕ್ರಮಂ, ವಿಜಯಂ!

# ಸಣ್ಣ ಸಂಗತಿ

೩

ನಟ್ಟಿರುಳ ಕರಿಮುಗಿಲ ನೀರ್-ತುಂಬಿಗಳ ನಡುವೆ
ಹುಣ್ಣಿಮೆಯ ಕಣ್ಣು ತೆರೆದಿದೆ. ತಾರೆ ಬಂದಿವೆ
ಬಾನ ಬೀದಿಗೆ. ಅತ್ತ ಹಿಡಿದ ಸೋನೆಯ ಶ್ರುತಿಗೆ
ಗಾಳಿಯೇ ಹಾಡುತಿದೆ. ಇತ್ತ ಈ ಮನೆಯೊಳಗೆ
ಪುಟ್ಟ ಮಗುವೊಂದು ಮಂಚದ ಬಳಿಯ ತೊಟ್ಟಿಲಲಿ
ಕಣ್ಣರ್ಧ ಮುಚ್ಚಿ ಮಲಗಿದೆ, ಅದೂ ಬರಿಮೈಲಿ !
ನಿದ್ದೆಗಣ್ಣಿನಲೆ ಪಕ್ಕದ ತಾಯಿ ಕೈ ನೀಡಿ
ಮತ್ತೆ ಹೊದಿಕೆಯನು ಸರಿಪಡಿಸುವಳು. ಮಗು ತಿರುಗಿ
ಹೊದಿಕೆಯನೆ ಕಿತ್ತೆಸೆದು ಮಲಗುವುದು ಬರಿಮೈಲಿ ;
ಸಣ್ಣಗಿದೆ ದೀಪ ಎಲ್ಲೊ ಒಂದು ಮೂಲೆಯಲಿ.

ಇದು ಸರಿಯೆ ? ತಪ್ಪೆ ?—ಉತ್ತರವಿಲ್ಲ. ದೆಸೆ ದೆಸೆಗೆ
ಎಲ್ಲ ಮಲಗಿಹರು ಮಾತಾಡದೆಯೆ, ನೋಡದೆಯೆ.
ನಿದ್ದೆ ಎಚ್ಚರಗಳಲಿ ಪೊರೆವ ಕೈ ದುಡಿಯುತಿದೆ ;
ಅದನು ಲೆಕ್ಕಿಸದೆ ಮಗು ಹೊದಿಕೆಯನು ಒದೆಯುತಿದೆ.

# ಮೊದಲ ಚರಣಗಳ ಸೂಚಿಕೆ